

ಸಂಸ್ಥಾಪಕರು: ಪ್ರೊ ಎಂ.ವಿ. ಸೀತಾರಾಮಯ್ಯ



# ಹೊಂಗನಸು



ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದ ವಾರ್ತಾಪತ್ರ

ಸಂಪುಟ: ೦೧ ಸಂಚಿಕೆ: ೦೨ ಮಾರ್ಚ್ ೨೦೧೫ ಸಂಪಾದಕರು : ಶ್ರೀ ಬಿ. ಆರ್. ರವೀಂದ್ರನಾಥ್




**ಚಂದಾ ವಿವರಗಳು**

**ವಾರ್ಷಿಕ ಚಂದಾ**
**ರೂ. ೨೦/-**
**ಐದು ವರ್ಷಗಳ ಚಂದಾ**
**ರೂ. ೧೦೦/-**


ವಿಳಾಸ

**ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ**
**ಸ್ಥಾಪನೆ : ೦೬-೦೫-೧೯೭೬**
**ಎಂ.ವಿ.ಸೀ. ಸ್ನಾತಕೋತ್ತರ ಸಂಶೋಧನ ಕೇಂದ್ರ**
ಬಿ.ಎಂ.ಶ್ರೀ. ಕಲಾಭವನ,
೩ನೇ ಮುಖ್ಯರಸ್ತೆ
ನರಸಿಂಹರಾಜ ಕಾಲೋನಿ
ಬೆಂಗಳೂರು - ೧೯
ದೂರವಾಣಿ:
೨೬೬೧೫೪೮೭೭, ೨೬೬೭೬೭೭೩
ಇಮೇಲ್ : bmsritrust@gmail.com


## ಡಾ. ಎಂ ಎಚ್ ಕೃಷ್ಣಯ್ಯ ರವರಿಗೆ ನಾಡೋಜ ಪ್ರಶಸ್ತಿ



ಬಿಎಂಶ್ರಿ ಸ್ಮಾರಕ ಪ್ರತಿಷ್ಠಾನದ ಗೌರವ ಅಧ್ಯಕ್ಷರಾದ ಪ್ರಸಿದ್ಧ ಲೇಖಕ, ಹೆಸರಾಂತ ವಿಮರ್ಶಕ ಡಾ.ಎಂಎಚ್ ಕೃಷ್ಣಯ್ಯ ಅವರಿಗೆ ಹಂಪಿಯ ಕನ್ನಡ ವಿಶ್ವವಿದ್ಯಾಲಯವು ನಾಡಿನ ಗೌರವಾನ್ವಿತ ಪ್ರಶಸ್ತಿಗಳಲ್ಲಿ ಒಂದಾದ ಈ ಸಾಲಿನ ನಾಡೋಜ ಪ್ರಶಸ್ತಿ ನೀಡುತ್ತಿದೆ. ಅವರ ಜೊತೆಗೆ ಶ್ರೀ ಎಸ್ ಆರ್ ರಾಮಸ್ವಾಮಿ ಹಾಗೂ ಡಾ.ಪಿ ಎಸ್ ಶಂಕರ್ ರವರಿಗೂ ಈ ಸಾಲಿನ ನಾಡೋಜ ಪ್ರಶಸ್ತಿಯನ್ನು ನೀಡಲಾಗುತ್ತಿದೆ.ಶ್ರೀ ಎಸ್ ಆರ್ ರಾಮಸ್ವಾಮಿ ಹಾಗೂ ಡಾ.ಪಿ ಎಸ್ ಶಂಕರ್ ರವರುಗಳೂ ನಾಡಿನ ಅಪ್ರತಿಮ ಸಾಧಕರಾಗಿದ್ದು ಈ ಎಲ್ಲಾ ಮಹನೀಯರುಗಳಿಗೆ ನಾಡೋಜಾ ಪ್ರಶಸ್ತಿ ಲಭಿಸಿರುವುದು ಸುತ್ಯಾರ್ಹವೇ.ನಮ್ಮ ಅಧ್ಯಕ್ಷರಾದ ಪಿವಿ ನಾರಾಯಣರವರ ಅನಿಸಿಕೆಯಂತೆ ಇವರುಗಳಿಗೆ ನಾಡೋಜ ಪ್ರಶಸ್ತಿ ಲಭಿಸಿರುವುದು ಅವರಿಗೆ ಸಂದಿರುವ ಗೌರವವೋ ಅಥವಾ ಇವರಿಗೆ ಪ್ರಶಸ್ತಿ ನೀಡುತ್ತಿರುವ ವಿಶ್ವವಿದ್ಯಾನಿಲಯ ಗಳಿಸಿಕೊಂಡ ಗೌರವವೋ ಎಂಬುದರ ಬಗ್ಗೆ ಜಿಜ್ಞಾಸೆ ಮೂಡುವುದು ಸಹಜ.ಶ್ರೀ ಎಸ್ ಆರ್ ರಾಮಸ್ವಾಮಿ, ಡಾ.ಪಿ ಎಸ್ ಶಂಕರ್ ಹಾಗೂ ಡಾ.ಎಂ ಎಚ್ ಕೃಷ್ಣಯ್ಯ ರವರಿಗೆ ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದ ಸಮಸ್ತ ಬಳಗ ಹೃತ್ಪೂರ್ವಕ ಅಭಿನಂದನೆಗಳನ್ನು ಅರ್ಪಿಸುತ್ತದೆ.

**ಡಾ. ಎಂ ಎಚ್ ಕೃಷ್ಣಯ್ಯ ರವರ ಪ್ರಮುಖ ವಿವರಗಳು:**

ಜನನ : 21-7-1937

ಸಾಹಿತ್ಯ ವಿಮರ್ಶಕ, ಕಲಾಪ್ರೇಮಿ, ಸಂಗೀತ ಪ್ರಿಯರಾದ ಕೃಷ್ಣಯ್ಯನವರು ಹುಟ್ಟಿದ್ದು ಮೈಸೂರು.ತಂದೆ ಹುಚ್ಚಯ್ಯ, ತಾಯಿ ಕೆಂಪಮ್ಮ. ವಿದ್ಯಾಭ್ಯಾಸ ಮೈಸೂರಿನಲ್ಲೇ.ಮೈಸೂರಿನ ಮಹಾರಾಜ ಕಾಲೇಜಿನಿಂದ ಬಿ.ಎ. (ಆನರ್ಸ್) ಮತ್ತು ಎಂ.ಎ. (ಕನ್ನಡ) ಪದವಿ.

ಪದವಿ ಗಳಿಸಿದ ನಂತರ ಉದ್ಯೋಗಕ್ಕೆ ಸೇರಿದ್ದು ಅಧ್ಯಾಪಕರಾಗಿ.ಬೆಂಗಳೂರು, ಕೋಲಾರ, ಮಂಗಳೂರು, ತುಮಕೂರು, ಮಂಡ್ಯ ಮುಂತಾದೆಡೆ ಸರಕಾರಿ ಕಾಲೇಜಿನಲ್ಲಿ ಅಧ್ಯಾಪಕರಾಗಿ, ರೀಡರಾಗಿ, ಪ್ರಾಧ್ಯಾಪಕರಾಗಿ ಬೋಧನಾ ಕಾರ್ಯ ನಿರ್ವಹಣೆ. **3ನೇ ಪುಟಕ್ಕೆ**

## ಸಂಪಾದಕೀಯ

**ಹೊಂಗನಸು**

ಬಿಎಂಶ್ರೀ ಸ್ಮಾರಕ ಪ್ರತಿಷ್ಠಾನದ ಗೌರವ ಅಧ್ಯಕ್ಷರಾದ ಡಾ. ಎಂಎಚ್ ಕೃಷ್ಣಯ್ಯ ಅವರಿಗೆ ಈ ಸಾಲಿನ ನಾಡೋಜ ಪ್ರಶಸ್ತಿ ಲಭ್ಯವಾಗಿದೆ.ಪ್ರತಿಷ್ಠಾನದ ಸದಸ್ಯರು, ಕಾರ್ಯಕಾರಿ ಸಮಿತಿ ಹಾಗೂ ಪದಾಧಿಕಾರಿಗಳ ಪರವಾಗಿ ಅವರಿಗೆ ಹಾರ್ದಿಕ ಅಭಿನಂದನೆಗಳನ್ನು ಸಲ್ಲಿಸೋಣ. ಇದು ನಮ್ಮೆಲ್ಲರಿಗೂ ಸಂತಸವನ್ನು ತಂದಿರುತ್ತದೆ. ಸನ್ಮಾನ್ಯರಿಗೆ ಇನ್ನೂ ಹಲವಾರು ಗೌರವಗಳು ಸಲ್ಲಬೇಕೆಂದು ನಮ್ಮೆಲ್ಲರ ಹಾರೈಕೆ.

ಮಾರ್ಚ್ ತಿಂಗಳಿನಲ್ಲಿ ಎರಡು ದೊಡ್ಡ ಕಾರ್ಯಕ್ರಮಗಳು ನಡೆಯಲಿವೆ. 14ನೇ ಮಾರ್ಚ್ ರಂದು ಶಾ. ಬಾಲೂ ರಾವ್ ಪ್ರಶಸ್ತಿಗಳ ವಿತರಣೆ ಹಾಗೂ 22ನೇ ಮಾರ್ಚ್ ರಂದು ಪ್ರೊ. ಷ ಶೆಟ್ಟರ್ – 80 ಕಾರ್ಯಕ್ರಮಗಳನ್ನು ಆಯೋಜಿಸಲಾಗಿದೆ.

ಹೊಂಗನಸು ಮಾಸಿಕದಲ್ಲಿ ಹೊಸ ಅಂಕಣಗಳನ್ನು ಆರಂಭಿಸಲಾಗುತ್ತಿದೆ. ಈ ತಿಂಗಳಿನಿಂದ ಪ್ರತಿಷ್ಠಾನದ ಪ್ರಕಟಣೆಗಳ ಕಿರು ಪರಿಚಯವನ್ನು ನೀಡಲು ಪ್ರಾರಂಭಿಸಿದ್ದೇವೆ. ಬರಲಿರುವ ಸಂಚಿಕೆಗಳಲ್ಲಿ ನಮ್ಮ ಪ್ರಕಟಣೆಗಳ ಹಾಗೂ ಇತರ ಗ್ರಂಥಗಳ ವಿಮರ್ಶೆಗಳನ್ನೂ ನೀಡಲಾಗುತ್ತದೆ.

ಪ್ರತಿಷ್ಠಾನದ ಚಟುವಟಿಕೆಗಳ ಬಗ್ಗೆ ಹಾಗೂ ಹೊಂಗನಸು ವಾರ್ತಾಪತ್ರದ ಬಗ್ಗೆ ನಿಮ್ಮ ಅನಿಸಿಕೆಗಳನ್ನು ಒಂದು ಪುಟಕ್ಕೆ ಮೀರದಂತೆ ಬರೆದು ನಮಗೆ ಕಳುಹಿಸಿಕೊಡಿ. ಆಯ್ದ ಪತ್ರಗಳನ್ನು ಈ ವಾರ್ತಾಪತ್ರದಲ್ಲಿ ಪ್ರಕಟಿಸಲಾಗುವುದು.

ಹೊಂಗನಸು ಯಶಸ್ವಿಯಾಗಲು ನಿಮ್ಮ ಆಶೀರ್ವಾದ, ಬೆಂಬಲ ಹಾಗೂ ಸಹಕಾರಗಳು ನಮಗೆ ಅಗತ್ಯವಾಗುತ್ತವೆ. ಈ ಮಾಸಿಕದ ವಾರ್ಷಿಕ ಚಂದಾ ಹಣ ಕೇವಲ ರೂ. 20/– ಆಗಿದ್ದು ಐದು ವರ್ಷಗಳ ಚಂದಾಹಣ ರೂ, 100/– ಮಾತ್ರ. ನೀವುಗಳು ಈ ಮಾಸಿಕಕ್ಕೆ ಚಂದಾದಾರರಾಗಲು ಕೋರುತ್ತೇವೆ.

**ಬಿ. ಆರ್. ರವೀಂದ್ರನಾಥ್**
ಸಂಪಾದಕರು

## ಮಾರ್ಚ್ 2015ರಲ್ಲಿ ಆಯೋಜಿಸಲಾಗಿರುವ ಕಾರ್ಯಕ್ರಮಗಳು

*** ಶಾ. ಬಾಲೂ ರಾವ್ ಯುವ ಬರಹಗಾರ ಪ್ರಶಸ್ತಿ ಪ್ರದಾನ**
**ದಿನಾಂಕ 14ನೇ ಮಾರ್ಚ್ 2015 – ಸಂಜೆ 5–30 ಗಂ.**
ಪ್ರಶಸ್ತಿ ಪುರಸ್ಕೃತರು ಶ್ರೀಮತಿ ಅಲಕಾ ಕಟ್ಟೆಮನೆ
**ಶಾ. ಬಾಲೂ ರಾವ್ ಅನುವಾದ ಪ್ರಶಸ್ತಿ ಪ್ರದಾನ**
ಪ್ರಶಸ್ತಿ ಪುರಸ್ಕೃತರು ಡಾ.ತಿಪ್ಪೇಸ್ವಾಮಿ
**ಪ್ರಶಸ್ತಿ ಪ್ರದಾನ : ಶ್ರೀ ಹರಿಪ್ರಕಾಶ್ ಕೋನೆಮನೆ,**
ಸಂಪಾದಕರು, ವಿಜಯವಾಣಿ ದಿನಪತ್ರಿಕೆ
ಸ್ಥಳ :ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನ

*** ತೀನಂ ಶ್ರೀ ದತ್ತಿ ಉಪನ್ಯಾಸ ಸರಣಿ**
**18ಮಾರ್ಚ್ 2015 –ಬುಧವಾರ – ಸಂಜೆ 6–00 ಗಂ.**
ವಿಷಯ: ಪ್ರಬಂಧ,ಛಂದಸ್ಸು ಮತ್ತು ಭಾಷಾ ಶಾಸ್ತ್ರ ಕ್ಷೇತ್ರಗಳಿಗೆ ತೀನಂಶ್ರೀ ರವರ ಕೊಡುಗೆ
ಉಪನ್ಯಾಸಕಾರರು : ಪ್ರೊ ಆ.ರಾ. ಮಿತ್ರ
ಸ್ಥಳ :ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನ

**ಪ್ರೊ. ಷ ಶೆಟ್ಟರ್ – 80**
**ವಿಚಾರ ಗೌರವ ಮತ್ತು ಅಭಿನಂದನೆ**
**22 ಮಾರ್ಚ್ 2015 – ಭಾನುವಾರ – ಬೆಳಗ್ಗೆ 10–00 ಗಂ.**
ಪ್ರೊ. ಷ ಶೆಟ್ಟರ್ ಅವರ ಮುಖ್ಯ ಕೃತಿಗಳ ಅವಲೋಕನ
**ವಿಷಯ : ತಂಗಂ ತಮಿಳಗಂ ಮತ್ತು ಕನ್ನಡ ನಾಡು ನುಡಿ**
ಉಪನ್ಯಾಸಕಾರರು: ಡಾ. ಜಿ ಬಿ ಹರೀಶ್
**ವಿಷಯ : ಹಳಗನ್ನಡ – ಲಿಪಿ, ಲಿಪಿಕಾರ, ಲಿಪಿ ವ್ಯವಸಾಯ**
ಉಪನ್ಯಾಸಕಾರರು: ಡಾ. ಹೆಚ್ ಎಸ್ ರಾಘವೇಂದ್ರರಾವ್
**ವಿಷಯ: ಸಾವನ್ನು ಅರಸಿ**
ಉಪನ್ಯಾಸಕಾರರು: ಡಾ. ಒ.ಎಲ್. ನಾಗಭೂಷಣಸ್ವಾಮಿ
ಅಧ್ಯಕ್ಷತೆ : ಪ್ರೊ. ಎಂ ಎಚ್ ಕೃಷ್ಣಯ್ಯ

*** ಸೋಸಲೆ ಅಯ್ಯಾಶಾಸ್ತ್ರಿ ದತ್ತಿ ಕಾರ್ಯಕ್ರಮ**
**25 ಮಾರ್ಚ್ 2015 –ಬುಧವಾರ ಸಂಜೆ 6–00 ಗಂ.**
ಉಪನ್ಯಾಸ : ಡಾ. ಎಚ್ ಎನ್ ಮುರಳೀಧರ
ವಿಷಯ : ಕನಕದಾಸರ ಕಾಯ ಮೀಮಾಂಸೆ

**ಸಿರಿ ಸಂಗೀತ ತಿಂಗಳ ಸಾಂಸ್ಕೃತಿಕ ಕಾರ್ಯಕ್ರಮ**
**ಭಕ್ತಿ ಗೀತೆಗಳು**
**28 ಮಾರ್ಚ್ 2015 – ಶನಿವಾರ ಸಂಜೆ 6–00 ಗಂ.**
ಗಾಯಕರು: ಶ್ರೀಮತಿ ಕುಮುದ ಗೋವಿಂದರಾವ್ ಮತ್ತು ಸಂಗಡಿಗರು

**ಮೊದಲನೇ ಪುಟದಿಂದ**

**ಡಾ. ಎಂ ಎಚ್ ಕೃಷ್ಣಯ್ಯ**

ಚನ್ನಪಟ್ಟಣದ ಕುವೆಂಪು ಕಾಲೇಜಿನ ಪ್ರಿನ್ಸಿಪಾಲರಾಗಿ, ಮಾಗಡಿ ಕಾಲೇಜಿನಲ್ಲಿ ಪ್ರಿನ್ಸಿಪಾಲರಾಗಿ ಕೆಲಕಾಲ ಸಲ್ಲಿಸಿದ ಸೇವೆ. ಬೆಂಗಳೂರಿನ ಮಹಾರಾಣಿ ಮಹಿಳಾ ಕಲಾ ಕಾಲೇಜಿನಲ್ಲಿ ಕನ್ನಡ ಪ್ರೊಫೆಸರಾಗಿ ನಿವೃತ್ತಿ.ಇದರ ಜೊತೆಗೆ ನಿಭಾಯಿಸಿದ ಹಲವಾರು ಜವಾಬ್ದಾರಿಗಳು. ಹಂಪಿ ವಿಶ್ವವಿದ್ಯಾಲಯದ ಸಿಂಡಿಕೇಟ್ ಸದಸ್ಯರಾಗಿ, ದೆಹಲಿಯ ಸಂಸ್ಕೃತಿ ಇಲಾಖೆಯ ಸ್ಕಾಲರ್‌ಷಿಪ್/ಫೆಲೊಷಿಪ್ ಆಯ್ಕೆ ಸಮಿತಿ ಸದಸ್ಯರಾಗಿ, ವಿಶ್ವವಿದ್ಯಾಲಯದ ಪಠ್ಯಗ್ರಂಥ ಸಮಿತಿಯಲ್ಲಿ ಪಿ.ಯು.ಸಿ. ಪಠ್ಯ ಸಮಿತಿಯಲ್ಲಿ ಸಲ್ಲಿಸಿದ ಸೇವೆ. ಕರ್ನಾಟಕ ಕಲಾ ವಾರ್ತೆ, ಕರ್ನಾಟಕ ಲಲಿತ ಅಕಾಡಮಿಯ ಪತ್ರಿಕೆಗಳಿಗೆ ಗೌರವ ಸಂಪಾದಕರಾಗಿ, ಕಲಾ ಪಂಥಮಾಲೆ, ಎಕ್ಸ್‌ಪ್ರೆಷನಿಸಂ, ಇಂಪ್ರೆಷನಿಸಂ ಗ್ರಂಥಗಳಿಗೆ ಪ್ರಧಾನ ಸಂಪಾದಕರಾಗಿ ಸಲ್ಲಿಸಿದ ಅಪಾರ ಸೇವೆ. ಪ್ರಭಾವಶಾಲಿ ಅಧ್ಯಾಪಕರಾದ ಕೃಷ್ಣಯ್ಯನವರು ಶಿಸ್ತಿನ ಪ್ರವಚನಕಾರರು.ಸಿದ್ಧತೆಯಿಲ್ಲದೆ ತರಗತಿಗೆ ಹೋದವರಲ್ಲ. ವ್ಯಾಖ್ಯಾನಿಸುವ ರೀತಿ, ಚಿಂತನೆಗೆ ಹಚ್ಚುವ ಕ್ರಮದಿಂದ ವಿದ್ಯಾರ್ಥಿಗಳಿಗೆ ಅಚ್ಚುಮೆಚ್ಚು.ಬರೆದದ್ದು ಕಡಿಮೆ.ಶಿಸ್ತಿನ ಅಧ್ಯಯನ, ಕಲಾವಿಮರ್ಶೆ, ಸಾಹಿತ್ಯ ವಿಮರ್ಶೆಯ ಸಿಂಹಪಾಲು.

ಕಲಾಲೋಕದ ದಿಗ್ಗಜಗಳ ರಚನೆಯ ತಲಸ್ಪರ್ಶಿ ಇತಿಹಾಸದ ಅಜಂತ ಎಲ್ಲೋರ, ರೂಪಶಿಲ್ಪಿ ಬಸವಯ್ಯ, ಎಚ್.ಎನ್. ಕುಲಕರ್ಣಿ ಮುಂತಾದವರು ಬಗ್ಗೆ ರಚಿಸಿದ ಕೃತಿಗಳು. ಕಲಾವಿಮರ್ಶಾ ಕೃತಿಗಳು–ಶೃಂಗಾರ ಲಹರಿ, ಎಂ.ಆರ್. ಹಡಪದ್. ಜೀವನಚರಿತ್ರೆ–'ತ್ಯಾಗಯೋಗಿ' ಕನಕಪುರದ ಎಸ್.ಕರಿಯಪ್ಪ, ಎಚ್.ಕೆ. ವೀರಣ್ಣಗೌಡರು.ಸಾಹಿತ್ಯವಿಮರ್ಶೆ–ಕಾವ್ಯಭಾಷೆ, ಸಾಹಿತ್ಯ ಕಲೆ. ಸಂಕ್ಷಿಪ್ತ ಕನ್ನಡ ಭಾಷೆಯ ಚರಿತ್ರೆ, ನಾಟಕ ಮತ್ತು ಸೌಂದರ್ಯಪ್ರಜ್ಞೆ, ನಿಟ್ಟೂರು ನೂರರ ನೆನಪು ಮುಂತಾದ ಗ್ರಂಥಗಳು. ಸಂಪಾದಿತ–ರನ್ನನ ಅಜಿತ ಪುರಾಣ ಸಗ್ರಹ, ಬಿರಿಮೊಗ್ಗು (ಪ್ರಬಂಧ), ಹೊಳಪು–ಝಳಪು (ಕವನ), ಕಾಲು ಶತಮಾನ ಕಂಡ ಕನ್ನಡ ಪತ್ರಿಕೆಗಳು (ಪತ್ರಿಕಾ ಅಕಾಡಮಿ), ಕಲೆ ಮತ್ತು ರಸಸ್ವಾದನೆ, ಸಾಹಿತ್ಯ ಮತ್ತು ಕಲೆಗಳಲ್ಲಿ ಪರಿವರ್ತನೆ ಮತ್ತು ಪ್ರಗತಿ, ಸಾಲುದೀಪಗಳು, ಸ್ವಾತಂತ್ರ್ಯೋತ್ತರ ಕನ್ನಡ ಸಾಹಿತ್ಯ ಮತ್ತು ಸಂಸ್ಕೃತಿ, ಹಳೆಯ ಗದ್ಯ ಸಾಹಿತ್ಯ, ಸುವಿದ್ಯಾ, ಬೆಂಗಳೂರಿನ ಕೆಂಪೇಗೌಡರ ವಂಶಸ್ಥರು, ಮೂರ್ತಾಮೂರ್ತ, ಕುವೆಂಪು ಸಾಹಿತ್ಯ–ಚಿತ್ರ ಸಂಪುಟ, ಬೆಂಗಳೂರು ದರ್ಶನ ಮುಂತಾದ ಮೂವತ್ತು ಕೃತಿ ಪ್ರಕಟಿತ.

ಶೃಂಗಾರ ಲಹರಿಗೆ ಲಲಿತಕಲಾ ಅಕಾಡಮಿ ಪುರಸ್ಕಾರ, ಸಂಕ್ಷಿಪ್ತ ಕನ್ನಡ ಭಾಷೆಯ ಚರಿತ್ರೆಗೆ ಕರ್ನಾಟಕ ಸಾಹಿತ್ಯ ಅಕಾಡಮಿ ಪ್ರಶಸ್ತಿ ಅವರಿಗೆ ಸಂದ ಪುರಸ್ಕಾರಗಳು.

# ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದಲ್ಲಿ ಫೆಬ್ರವರಿ 2015 ತಿಂಗಳಿನಲ್ಲಿ ನಡೆದ ಕಾರ್ಯಕ್ರಮಗಳು

ದಿನಾಂಕ 9ನೇ ಫೆಬ್ರವರಿ ಹಾಗೂ 10ನೇ ಫೆಬ್ರವರಿ 2015 ರಂದು ಎಂಇಎಸ್ ಕಾಲೇಜು, ಮಲ್ಲೇಶ್ವರಂ ಹಾಗೂ ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನ ಸಹಯೋಗದಲ್ಲಿ

ನವ್ಯ ಪ್ರಜ್ಞೆ ಸ್ವರೂಪ ಭೇದ – ಪ್ರೊ.ಯು.ಆರ್. ಅನಂತಮೂರ್ತಿ ಹಾಗೂ ಯಶವಂತ ಚಿತ್ತಾಲರ ಸಾಹಿತ್ಯದ ಸೂಕ್ಷ್ಮಗಳನ್ನು ಕುರಿತ 2 ದಿನದ ರಾಷ್ಟ್ರೀಯ ವಿಚಾರ ಸಂಕಿರಣವನ್ನು ಎಂಇಎಸ್ ಕಾಲೇಜು ಆವರಣದಲ್ಲಿ ಪ್ರತಿದಿನ ಬೆಳಿಗ್ಗೆ 10 ರಿಂದ 4 ಘಂಟೆಯವರೆಗೆ ನಡೆಸಲಾಯಿತು. ದಿನಾಂಕ 9ನೇ ಫೆಬ್ರವರಿ 2015 ರಂದು ಬೆಳಿಗ್ಗೆ 10ಘಂಟೆಗೆ ಈ ವಿಚಾರ ಸಂಕಿರಣದ ಉದ್ಘಾಟನೆಯನ್ನು ಶ್ರೀಮತಿ ವಿಮಲಾ ರಂಗಾಚಾರ್ ರವರು ನೆರವೇರಿಸಿದರು. ವಿದ್ವಾಂಸರುಗಳಾದ ಡಾ. ಜಿಬಿ ಹರೀಶ್, ಪ್ರೊ ದಿವಾಕರ್, ಡಾ. ಎಂಎಸ್ ಆಶಾದೇವಿ, ಡಾ.ತ್ಯಾಗರಾಜ್, ಶ್ರೀಮತಿ ಜಿ.ನಾ. ತೇಜಶ್ರೀ, ಡಾ. ಹೆಚ್.ಎಸ್. ರಾಘವೇಂದ್ರರಾವ್, ಡಾ. ನಟರಾಜ್ ಹುಳಿಯಾರ್, ಡಾ.ಮನು ಚಕ್ರವರ್ತಿ ರವರುಗಳು ವಿದ್ವತ್ ಪೂರ್ಣ ಉಪನ್ಯಾಸಗಳನ್ನು ನೀಡಿ ಪ್ರೊ.ಯು.ಆರ್. ಅನಂತಮೂರ್ತಿ ಹಾಗೂ ಯಶವಂತ ಚಿತ್ತಾಲರ ಸಾಹಿತ್ಯದ ವಿವಿಧ ಆಯಾಮಗಳತ್ತ ಬೆಳಕು ಚೆಲ್ಲಿದರು.ಕಾಲೇಜಿನ ವಿದ್ಯಾರ್ಥಿಗಳು ಹಾಗೂ ಇತರ ಸಾಹಿತ್ಯಾಸಕ್ತರಿಗೆ ಬಹಳ ಉಪಯುಕ್ತವಾದ ಮಾಹಿತಿ ಹಾಗೂ ದೃಷ್ಟಿಕೋಣಗಳ ಬಗ್ಗೆ ಲಭ್ಯವಾಯಿತು.

ದಿನಾಂಕ 10ನೇ ಫೆಬ್ರವರಿ 2015 4 ಘಂಟಗೆ ನಡೆದ ಸಮಾರೋಪ ಕಾರ್ಯಕ್ರಮದಲ್ಲಿ ಅಧ್ಯಕ್ಷತೆಯನ್ನು ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದ ಅಧ್ಯಕ್ಷರಾದ ಡಾ. ಪಿ.ವಿ. ನಾರಾಯಣ ವಹಿಸಿದ್ದರು. ಎಂಇಎಸ್ ಕಾಲೇಜಿನ ಕಾರ್ಯದರ್ಶಿಯವರಾದ ಹಿರಿಯ ವಿದ್ವಾಂಸ ಪ್ರೊ ಶೇಷಾದ್ರಿ ಐಯಂಗಾರ್ ರವರು ವಿಚಾರ ಸಂಕಿರಣವನ್ನು ಚೊಕ್ಕವಾಗಿ ನಿರ್ವಹಿಸಿದ ಕಾಲೇಜಿನ ಸಿಬ್ಬಂದಿಯವರಿಗೆ ಅಭಿನಂದಿಸಿ ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದ ಸಹಯೋಗದ ಬಗ್ಗೆ ಸಂತಸ ವ್ಯಕ್ತ ಪಡಿಸಿ ಮುಂದಿನ ದಿನಗಳಲ್ಲಿ ಇದೇ ರೀತಿಯ ಕಾರ್ಯಕ್ರಮಗಳನ್ನು ನಡೆಸಲು ಆಸಕ್ತಿ ತೋರಿಸಿದರು.ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದ ಅಧ್ಯಕ್ಷರಾದ ಡಾ. ಪಿ.ವಿ. ನಾರಾಯಣರವರು ವಿಚಾರ ಸಂಕಿರಣದ ಬಗ್ಗೆ ಹಾಗೂ ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದ ಚಟುವಟಿಕೆಗಳನ್ನು ವಿವರಿಸಿದರು.

ದಿನಾಂಕ 14ನೇ ಫೆಬ್ರವರಿ 2015ರಂದು ತೀನಂ ಶ್ರೀ ದತ್ತಿ ಉಪನ್ಯಾಸ ಸರಣಿ ಉಪನ್ಯಾಸವನ್ನು ಪ್ರೊ ಆ.ರಾ.ಮಿತ್ರ ರವರು ಭಾರತೀಯ ಕಾವ್ಯ ವಿಮಾಂಸೆಯ ಬಗ್ಗೆ ನೀಡಿದರು.ಈ ವಿದ್ವತ್ ಪೂರ್ಣ ಉಪನ್ಯಾಸದಲ್ಲಿ ಪ್ರೊ.ತೀನಂಶ್ರೀ ರವರ ಕಾವ್ಯ



ವಿಮಾಂಸೆಯ ವೈಶಿಷ್ಟ್ಯಗಳನ್ನು ಉದಾಹರಣೆ ಸಹಿತವಾಗಿ ಸವಿಸ್ತಾರವಾಗಿ ವಿವರಿಸಿ ತೀನಂಶ್ರೀಯವರ ಪ್ರತಿಭೆಯ ಬಗ್ಗೆ ಹೆಚ್ಚಿನ ಬೆಳಕನ್ನು ಚೆಲ್ಲಿದರು.ಈ ಕಾರ್ಯಕ್ರಮದ ಅಧ್ಯಕ್ಷತೆಯನ್ನು ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದ ಅಧ್ಯಕ್ಷರಾದ ಡಾ. ಪಿ.ವಿ. ನಾರಾಯಣರವರು ವಹಿಸಿದ್ದರು.

ದಿನಾಂಕ 16ನೇ ಫೆಬ್ರವರಿ 2015 ರಂದು ಕೆ.ಎಸ್. ನರಸಿಂಹ



ಸ್ವಾಮಿ – ಒಂದು ನೆನಪು ಕಾರ್ಯಕ್ರಮವನ್ನು ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದಲ್ಲಿ ನಡೆಸಲಾಯಿತು.ಮೊದಲಿಗೆ ಕೆಎಸ್ ನ ರವರ ಬಗ್ಗೆ ನೆನಪುಗಳನ್ನು ಮೆಲುಕು ಹಾಕಿದ ಶ್ರೀ ಬಾಲಕೃಷ್ಣ ಕೆ. ಎನ್. ರವರು ಕೆಎಸ್ ನ ಹಾಗೂ ಇತರ ಹಿರಿಯ ಸಾಹಿತಿಗಳ ಜೊತೆಗಿನ ಒಡನಾಟದ ವಿವರಗಳನ್ನು ತಿಳಿಸಿಕೊಟ್ಟರು. ಹಾಗೆಯೇ ಕೆಎಸ್ ನ ರವರ ಕವಿತೆಗಳ ಪ್ರಕಟಣೆಗಳ ಬಗ್ಗೆ ಹೆಚ್ಚು ಪ್ರಚಾರ ಪಡೆಯದಿರುವ ಕೆಲವು ಕುತೂಹಲಕರ ಸಂಗತಿಗಳನ್ನು ಹೊರಗೆಡವಿದರು.

ನಂತರ ಕುಮಾರಿ ಅಪೂರ್ವ ಲಕ್ಷ್ಮಿಯವರು ಕೆಎಸ್ ನ ರವರ ಕೆಲವು ಕವಿತೆಗಳನ್ನು ಸುಶ್ರಾವ್ಯವಾಗಿ ಹಾಡಿದರು.

ಕರ್ನಾಟಕ ವಾರ್ತಾ ಇಲಾಖೆಯವರು ಹಾಗೂ ಮೈಸೂರಿನ ಭಾಷಾ ಮಂದಾಕಿನಿಯವರು ತಯಾರಿಸಿರುವ ಕೆ ಎಸ್ ನ ರವರ ಬಗ್ಗೆಯ ಎರಡು ಸಾಕ್ಷ್ಯ ಚಿತ್ರಗಳನ್ನು ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದಲ್ಲಿ ನೂತನವಾಗಿ ಅಳವಡಿಸಲಾದ ಪ್ರೊಜೆಕ್ಟರ್‌ನ ಮೂಲಕ ಪ್ರದರ್ಶಿಸಲಾಯಿತು.ಕೆಎಸ್ ನರವರ ನೆನಪುಗಳನ್ನು ಹಂಚಿಕೊಳ್ಳಲು ಬಹಳಷ್ಟು ಸದಸ್ಯರು ಹಾಗೂ ಕೆಎಸ್ ನ ರವರ ಅಭಿಮಾನಿಗಳು ಭಾಗಿಯಾಗಿದ್ದರು.

ಅಂದಿನ ದಿನ ಶ್ರೀ ವೆಂಕಟೇಶ್ ರವರು ಕೆ ಎಸ್




ನರಸಿಂಹಸ್ವಾಮಿಯವರ ಬಗ್ಗೆಯ ವಿವರಗಳುಪ್ರಕಟಗೊಂಡಿರುವ ಎಲ್ಲಾ ಪತ್ರಿಕೆಗಳ ಅಮೂಲ್ಯ ಪ್ರತಿಗಳನ್ನು ಪ್ರದರ್ಶಿಸಿದರು.ಶ್ರೀ ವೆಂಕಟೇಶ್ ರವರು ನಾಡಿನ ಎಲ್ಲಾ ಪ್ರಸಿದ್ದ ಸಾಧಕರ ಬಗ್ಗೆಯ ಎಲ್ಲಾ ಪತ್ರಿಕಾ ಪ್ರಕಟಣೆಗಳನ್ನೂ ಸಂಗ್ರಹಿಸಿ ಸೂಕ್ತ ರೀತಿಯಲ್ಲಿ ವ್ಯವಸ್ಥಿತಗೊಳಿಸಿ ಸಾರ್ವಜನಿಕ ಕಾರ್ಯಕ್ರಮಗಳಲ್ಲಿ ಪ್ರದರ್ಶನಕ್ಕೆ ಇಡುವ ಪರಿಪಾಠವನ್ನು ಬೆಳೆಸಿಕೊಂಡು ಬಂದಿರುತ್ತಾರೆ.ಅವರ ಈ ಕಾರ್ಯ ವಿಶಿಷ್ಟವಾದದ್ದಾಗಿದ್ದು ಬಹಳ ಶ್ಲಾಘನೀಯವಾಗಿರುತ್ತದೆ.ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನವು ಅವರಿಗೆ ಅಭಿನಂದಿಸುತ್ತದೆ.



ದಿನಾಂಕ 18ನೇ ಫೆಬ್ರವರಿ 2015ಎಂಎ ಜಯಚಂದ್ರ ದತ್ತಿ ಕಾರ್ಯಕ್ರಮದಡಿಯಲ್ಲಿ ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದಲ್ಲಿಡಾ.ಜಿ.ಬಿ. ಹರೀಶ್ ರವರು ದೇವಚಂದ್ರನ ರಾಜಾವಳಿ ಕಥಾಸಾರದ ಬಗ್ಗೆ ಉಪನ್ಯಾಸ ನೀಡಿದರು.ಈ ಕಾರ್ಯಕ್ರಮದ ಅಧ್ಯಕ್ಷತೆಯನ್ನು ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದ ಅಧ್ಯಕ್ಷರಾದ ಡಾ. ಪಿ.ವಿ. ನಾರಾಯಣರವರು ವಹಿಸಿದ್ದರು.

ದಿನಾಂಕ 27ನೇ ಫೆಬ್ರವರಿ 2015ರಂದು ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದ ಮೂಲಕ ಎಂಫಿಲ್ ಪದವಿ ಪಡೆದ ವಿದ್ಯಾರ್ಥಿಗಳಿಗೆ ಪದವಿ ಪ್ರದಾನ ಮಾಡಲಾಯಿತು.ಆ ದಿನವನ್ನು ಸಂಶೋಧನಾ ದಿನ ಎಂದು ಪರಿಗಣಿಸಲಾಗಿತ್ತು.ಎಂಫಿಲ್ ವಿದ್ಯಾರ್ಥಿಗಳಿಗೆ ಪದವಿ ಪ್ರದಾನವನ್ನು ಡಾ.ನಿತ್ಯಾನಂದ ಬಿ ಶೆಟ್ಟಿ, ಅಧ್ಯಕ್ಷರು, ಡಿವಿಜಿ ಕನ್ನಡ ಅಧ್ಯಯನ ಕೇಂದ್ರ, ತುಮಕೂರು ವಿಶ್ವವಿದ್ಯಾಲಯ, ಇವರು ನೆರವೇರಿಸಿದರು.ಸಾಂಸ್ಕೃತಿಕ ಅಧ್ಯಯನದ ಬಗ್ಗೆ ಆಳವಾಗಿ ಅಧ್ಯಯನ ನಡೆಸಿರುವ ಡಾ.ನಿತ್ಯಾನಂದ ಬಿ ಶೆಟ್ಟಿರವರು ಸಂಶೋಧನೆ ಎಂಬುದರ ಬಗ್ಗೆ ಕಿರು ಉಪನ್ಯಾಸ ನೀಡಿ ವಿದ್ಯಾರ್ಥಿಗಳಿಗೆ ಮಾರ್ಗದರ್ಶನ ನೀಡಿದರು.


27/02/2015

ಸಂಶೋಧನಾವಿದ್ಯಾರ್ಥಿಗಳು ಸಂಶೋಧನೆಯ ಮೂಲ ಅರ್ಥ ಅರಿಯದೆ ಸಂಶೋಧನೆ ನಡೆಸುತ್ತಿದ್ದಾರೆ. ಕೆಲ ವಿದ್ಯಾರ್ಥಿಗಳಂತೂ ಪ್ರಶ್ನೋತ್ತರದ ರೂಪದಲ್ಲಿ ಸಂಶೋಧನೆ ಮಾಡಿ ಮುಗಿಸುತ್ತಿದ್ದಾರೆ.ಸಂಶೋಧನೆ ಎಂದರೆ ಕೇವಲ ಉತ್ತರ ಬರೆಯುವ ಪ್ರಶ್ನೆಯಾಗದೆ ಪ್ರಶ್ನೆಗಳನ್ನು ಎತ್ತುವ ಪ್ರಬಂಧಗಳಾಗಬೇಕು. ಆದರೆ ಅಂತಹ ಪ್ರಬಂಧಗಳನ್ನು ಯಾರೂ ರಚಿಸುತ್ತಿಲ್ಲ ಸಂಶೋಧನೆಯ ವಿಧಾನವನ್ನು ಎಲ್ಲರೂ ಮರೆತಿರುವಂತೆ ಕಾಣುತ್ತಾರೆಎಂದು ಆತಂಕ ವ್ಯಕ್ತಪಡಿಸಿದರು.

ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದ ಅಧ್ಯಕ್ಷರಾದ ಡಾ. ಪಿ.ವಿ. ನಾರಾಯಣರವರು ಪ್ರಾಸ್ತಾವಿಕ ನುಡಿಗಳನ್ನು ಆಡಿ ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದ ಚಟುವಟಿಕೆಗಳನ್ನು ವಿವರಿಸಿದರು.ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದ ಶೈಕ್ಷಣಿಕ ಸಂಯೋಜನಾಧಿಕಾರಿಯಾದ ಡಾ. ವಿಜಯಾ ಸುಬ್ಬರಾಜ್ ರವರು ಎಂಫಿಲ್ ಪದವಿ ಪಡೆದ ವಿದ್ಯಾರ್ಥಿಗಳಿಗೆ ಮಾರ್ಗದರ್ಶನ ನೀಡಲು ಶ್ರಮಿಸಿದ ವಿದ್ವಾಂಸರಿಗೆ ಧನ್ಯವಾದಗಳನ್ನು ತಿಳಿಸಿದರು.

ಈ ಕಾರ್ಯಕ್ರಮದ ಅಧ್ಯಕ್ಷತೆಯನ್ನು ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದ ಅಧ್ಯಕ್ಷರಾದ ಡಾ. ಪಿ.ವಿ. ನಾರಾಯಣರವರು ವಹಿಸಿದ್ದರು.

**ದಿನಾಂಕ 28ನೇ ಫೆಬ್ರವರಿ 2015**

ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದ ಪ್ರತಿ ತಿಂಗಳ ಸಿರಿಸಂಗೀತ ಕಾರ್ಯಕ್ರಮದಡಿಯಲ್ಲಿ ಎಸ್. ಪ್ರವೀಣ್ ಕುಮಾರ್ ಮತ್ತು ಸಂಗಡಿಗರು ಭಕ್ತಿ ಗೀತೆಗಳ ಗಾಯನ ನಡೆಸಿಕೊಟ್ಟರು.


28/02/2015

## ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದಲ್ಲಿ ನಡೆದ ಪ್ರಮುಖ ಕಾರ್ಯಕ್ರಮಗಳು ಈಗ ಯೂ ಟ್ಯೂಬ್ ನಲ್ಲಿ ಲಭ್ಯ

ಸದಸ್ಯರು ಹಾಗೂ ವಿಶ್ವದಾದ್ಯಂತ ಇರುವ ಪ್ರತಿಷ್ಠಾನದ ಅಭಿಮಾನಿಗಳ ಅನುಕೂಲಕ್ಕಾಗಿ ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದಲ್ಲಿ ನಡೆದ ಪ್ರಮುಖ ಕಾರ್ಯಕ್ರಮಗಳ ಧ್ವನಿ ಮುದ್ರಿತ ಉಪನ್ಯಾಸಗಳು ಹಾಗೂ ವಿಡಿಯೋಗಳನ್ನು ಜನಪ್ರಿಯ ಯೂ ಟ್ಯೂಬ್ ನಲ್ಲಿ ಅಳವಡಿಸಲಾಗಿದೆ. ನಮ್ಮ ಕಾರ್ಯಕ್ರಮಗಳನ್ನು ಯೂಟ್ಯೂಬ್ ನಲ್ಲಿ ವೀಕ್ಷಿಸಲು ನೀವು ಮಾಡಬೇಕಾದುದು ಇಷ್ಟೇ:

ಜಾಲತಾಣ www.youtube.comಕ್ಕೆ ಭೇಟಿ ನೀಡಿ bmsri ಎಂದು ಟೈಪ್ ಮಾಡಿ. ಕೂಡಲೆ ನಾವು ಅಪ್ ಲೋಡ್ ಮಾಡಿರುವ ಎಲ್ಲಾ ಕಾರ್ಯಕ್ರಮಗಳು ಲಭ್ಯವಾಗುತ್ತವೆ. ಒಮ್ಮೆ ಭೇಟಿ ನೀಡಿ ನಿಮ್ಮ ಅಮೂಲ್ಯ ಸಲಹೆಗಳನ್ನು ನೀಡಬೇಕು ಎಂದು ಕೋರುತ್ತೇವೆ.

**FORM IV**

**(See Rule-8)**

Statement about ownership and other particulars about Newspaper "HONGANASU Kannada Monthly" Bangalore. As required under Rules 8 of the Registration A Newspapers (Central) Rules 1956.

1. Place of Publication : Bangalore
2. Periodicity of publication : Monthly
3. Printer's Name : Sri. B.R. Ravindranath
   Whether Citizen of India : Yes
   Address : BMSree Smaraka Pratishtana, 3rd Main, NR Colony, Bangalore-560019
4. Publisher's Name : Sri. B.R. Ravindranath on behalf of the BMSree Smaraka Pratishtana, (Regd.)
   Whether Citizen of India : Yes
   Address : BMSree Smaraka Pratishtana, 3rd Main, NR Colony, Bangalore-560019
5. Editor's Name : Sri. B.R. Ravindranath
   Whether Citizen of India : Yes
   Address : BMSree Smaraka Pratishtana, 3rd Main, NR Colony, Bangalore-560019

I, B.R. Ravindranath here by Declare that the particulars given are true to the best of my knowledge and belief.

Bangalore

1st March, 2015

Sd/-

B.R. Ravindranath

**ಶಾ. ಬಾಲೂ ರಾವ್ ಯುವ ಬರಹಗಾರ ಪ್ರಶಸ್ತಿ**

ಶ್ರೀಮತಿ ಕಮಲಿನಿ ಶಾ ಬಾಲೂರಾವ್ ರವರು ಪ್ರತಿಷ್ಠಾನದಲ್ಲಿ ಸ್ಥಾಪಿಸಿರುವ ಶಾ. ಬಾಲೂ ರಾವ್ ಯುವ ಬರಹಗಾರ ಪ್ರಶಸ್ತಿ ಪಡೆಯಲು ಅರ್ಹತೆಗಳು ಹೀಗಿದ್ದವು:

ಲೇಖಕರ ವಯಸ್ಸು 35 ವರ್ಷ ಮೀರಿರಬಾರದು

ಪುಸ್ತಕವು 2013ರಲ್ಲಿ ಮೊದಲ ಬಾರಿಗೆ ಪ್ರಕಟವಾಗಿರಬೇಕು

ಪುಸ್ತಕವು ಲೇಖಕರ ಮೊದಲನೇ ಕೃತಿಯಾಗಿರಬೇಕು

ಇದಕ್ಕಾಗಿ ಪ್ರತಿಷ್ಠಾನವು ಸೆಪ್ಟೆಂಬರ್ 2014 ರಲ್ಲಿ ಅರ್ಜಿಗಳನ್ನು ಆಹ್ವಾನಿಸಿ ರಾಜ್ಯದ ಎಲ್ಲಾ ಪ್ರಮುಖ ದಿನಪತ್ರಿಕೆಗಳಲ್ಲಿ ಪತ್ರಿಕಾ ಪ್ರಕಟಣೆಗಳು ಪ್ರಕಟವಾಗಿದ್ದವು. ಇದಕ್ಕಾಗಿ ದೇಶಾದ್ಯಂತ ಒಟ್ಟು 60 ಸಾಹಿತಿಗಳು ತಮ್ಮ ಪುಸ್ತಕಗಳನ್ನು ಕಳುಹಿಸಿಕೊಟ್ಟರು. ಈ ಎಲ್ಲ ಪುಸ್ತಕಗಳನ್ನು ಪರಿಶೀಲಿಸಿ ಸೂಕ್ತ ಪುಸ್ತಕವನ್ನು ಆಯ್ಕೆ ಮಾಡಲು ಪ್ರತಿಷ್ಠಾನವು ಒಂದು ಆಯ್ಕೆ ಸಮಿತಿಯನ್ನು ರಚಿಸಿತ್ತು. ಡಾ. ಆರ್. ಲಕ್ಷ್ಮಿನಾರಾಯಣ ಹಾಗೂ ಡಾ. ಸುರೇಶ್ ನಾಗಲಮಡಿಕೆ ರವರು ಈ ಆಯ್ಕೆ ಸಮಿತಿಯ ಸದಸ್ಯರಾಗಿದ್ದರು.ಅವರು ಎಲ್ಲಾ ಪುಸ್ತಕಗಳನ್ನು ಪರಿಶೀಲಿಸಿ ಶ್ರೀಮತಿ ಅಲಕಾ ಕಟ್ಟೆಮನೆಯವರ "ಶಾಲ್ಮಲೆಯ ಹೊನಲಲ್ಲಿ" ಎಂಬ ಕಥಾಸಂಕಲನವನ್ನು ಆಯ್ಕೆ ಮಾಡಿರುತ್ತಾರೆ.

**ಶಾ. ಬಾಲೂ ರಾವ್ ಅನುವಾದ ಪ್ರಶಸ್ತಿ**

ಶ್ರೀಮತಿ ಕಮಲಿನಿ ಶಾ ಬಾಲೂರಾವ್ ರವರು ಪ್ರತಿಷ್ಠಾನದಲ್ಲಿ ಸ್ಥಾಪಿಸಿರುವ ಶಾ. ಬಾಲೂ ರಾವ್ ಅನುವಾದ ಪ್ರಶಸ್ತಿ ಪಡೆಯಲು ಅರ್ಹತೆಗಳು ಹೀಗಿದ್ದವು:

ಬೇರೆ ಭಾಷೆಯಿಂದ ಕನ್ನಡಕ್ಕೆ ಅಥವಾ ಕನ್ನಡದಿಂದ ಇಂಗ್ಲೀಷಿಗೆ ಅನುವಾದವಾಗಿರುವ ಪುಸ್ತಕವು 2013ರಲ್ಲಿ ಮೊದಲ ಬಾರಿಗೆ ಪ್ರಕಟವಾಗಿರಬೇಕು

ಇದಕ್ಕಾಗಿ ಪ್ರತಿಷ್ಠಾನವು ಸೆಪ್ಟೆಂಬರ್ 2014 ರಲ್ಲಿ ಅರ್ಜಿಗಳನ್ನು ಆಹ್ವಾನಿಸಿ ರಾಜ್ಯದ ಎಲ್ಲಾ ಪ್ರಮುಖ ದಿನಪತ್ರಿಕೆಗಳಲ್ಲಿ ಪತ್ರಿಕಾ ಪ್ರಕಟಣೆಗಳು ಪ್ರಕಟವಾಗಿದ್ದವು. ಇದಕ್ಕಾಗಿ ದೇಶಾದ್ಯಂತ ಒಟ್ಟು 59ಅನುವಾದಕರು ತಮ್ಮ ಪುಸ್ತಕಗಳನ್ನು ಕಳುಹಿಸಿಕೊಟ್ಟರು. ಈ ಎಲ್ಲ ಪುಸ್ತಕಗಳನ್ನು ಪರಿಶೀಲಿಸಿ ಸೂಕ್ತ ಪುಸ್ತಕವನ್ನು ಆಯ್ಕೆ ಮಾಡಲು ಪ್ರತಿಷ್ಠಾನವು ಒಂದು ಪ್ರತ್ಯೇಕ ಆಯ್ಕೆ ಸಮಿತಿಯನ್ನು ರಚಿಸಿತ್ತು. ಪ್ರೊಫೆಸರ್ ಎನ್ ಎಸ್ ರಾಘವನ್ ಹಾಗೂ ಡಾ. ಅನ್ನದಾನೇಶ್ ರವರು ಈ ಆಯ್ಕೆ ಸಮಿತಿಯ ಸದಸ್ಯರಾಗಿದ್ದರು. ಅವರು ಎಲ್ಲಾ ಪುಸ್ತಕಗಳನ್ನು ಪರಿಶೀಲಿಸಿ ಡಾ. ತಿಪ್ಪೆಸ್ವಾಮಿಯವರ ಸಂರಚನವಾದ, ಸಂರಚನೋತ್ತರವಾದ ಹಾಗೂ ಪ್ರಾಚ್ಯ ಕಾವ್ಯ ಮೀಮಾಂಸೆ ಎಂಬ ಗ್ರಂಥವನ್ನು ಆಯ್ಕೆ ಮಾಡಿರುತ್ತಾರೆ.

**ದಿವಂಗತ ಶ್ರೀ ಶಾ. ಬಾಲೂರಾವ್ ಅವರು ಪ್ರಖ್ಯಾತ ಸಾಹಿತಿಯಾಗಿದ್ದರು. ಇಂಗ್ಲೀಷ್ ಹಾಗೂ ಕನ್ನಡದಲ್ಲಿ ಮೌಲಿಕವಾದ ಬರವಣಿಗೆಯನ್ನು ಮಾಡಿರುತ್ತಾರೆ. ಸ್ವತಂತ್ರವಾಗಿ ಕಥೆಗಳನ್ನು ಬರೆದಿದ್ದಲ್ಲದೆ ಅನುವಾದಗಳನ್ನೂ ಮಾಡಿರುತ್ತಾರೆ. ಬಂಗಾಳಿ ಮತ್ತು ರಷ್ಯನ್ ಭಾಷೆಗಳಿಂದ ನೇರವಾಗಿ ಕಥೆಗಳನ್ನು ಕವಿತೆಗಳನ್ನು ಅನುವಾದ ಮಾಡಿರುವುದು ಅವರ ಹೆಗ್ಗಳಿಕೆ.**

# ಬಿ ಎಂ ಶ್ರೀ ಪ್ರತಿಷ್ಠಾನದ ಪ್ರಕಟಣೆಗಳ ಕಿರುಪರಿಚಯ

**ಇಂಗ್ಲಿಷ್ ಗೀತೆಗಳು : ಮೂಲ ಆಂಗ್ಲ ಕವನಗಳೊಂದಿಗೆ**

(ತೃತೀಯ ಮುದ್ರಣ2013)

ಪು. xvi+192 ಬೆಲೆ ರೂ. 100/–

19ನೇ ಶತಮಾನದ ಉತ್ತರ ಭಾಗದಲ್ಲಿ ಇಂಗ್ಲಿಷ್ ಸಾಹಿತ್ಯದ ಪರಿಚಯ ಲಾಭವನ್ನು ಪಡೆದ ಸಾಹಿತಿಗಳು ಜಡಗಟ್ಟಿದ ಸಂಪ್ರದಾಯ ಮಾರ್ಗವನ್ನು ತೊರೆದು ಹೊಸ ಮಾರ್ಗದಲ್ಲಿ ಕಾವ್ಯ ರಚನೆ ಮಾಡಬೇಕು, ಮಾಡಿಸಬೇಕು ಎಂಬ ಉತ್ಕಟಪ್ರೇರಣೆ ಹೊಂದಿದ್ದರು. 'ಶ್ರೀ' ಯವರು ಇದೇಪಂಕ್ತಿಗೆಸೇರಿದವರು, 'ಇಂಗ್ಲಿಷ್ ಗೀತೆಗಳು'ಸಂಕಲನವನ್ನು 1926ರಲ್ಲಿಹೊರತಂದರು, ಹೆಸರುಭಾವಮುಂತಾದವು ಕನ್ನಡತನಕ್ಕೆ ಹೊಂದಿಕೆಯಾಗುವಂತೆ ಮಾರ್ಪಾಡಾಗಿದ್ದರೂ, ಪದಪ್ರಯೋಗ, ಶೈಲಿ, ಛಂದಸ್ಸು, ಭಾವಗಳುಮೂಲ ಕವಿಯ ವ್ಯಕ್ತಿತ್ವವನ್ನು ಅನುಸರಿಸಿದೆ. 'ಶ್ರೀ' ಯವರಮನಸ್ಸಿಗೆ ಒಪ್ಪಿಬಂದ ಇಂಗ್ಲಿಷ್ ಕವಿತೆಗಳನ್ನು ಆಯ್ಕೆಮಾಡಿ ಕನ್ನಡೀಕರಿಸಲಾಗಿತ್ತು. ಪ್ರಸ್ತುತಸಂಕಲನದಲ್ಲಿ 60 ಅನುವಾದಿಸಿದ ಕನ್ನಡ ಕವಿತೆಗಳಿದ್ದು ಅವುಗಳ ಇಂಗ್ಲಿಷ್ ಮೂಲ ರೂಪವನ್ನೂ ಒದಗಿಸಲಾಗಿದೆ. ಇದು ಕನ್ನಡ ನವೋದಯ ಕಾವ್ಯದ ಆಚಾರ್ಯ ಕೃತಿ.

**ಸೃಜನ ಸಾಹಿತ್ಯ**

(ಎಂ. ವಿ. ಸೀ ವಾಚಿಕೆ – 1)

ಸಂಪಾದಕರು: ಶ್ರೀಧರ ಮೂರ್ತಿ ಎನ್. ಎಸ್

ಪು. xiv+292 ಬೆಲೆ ರೂ 150/– ಪ್ರಕಟಣೆ 2012

ಎಂ. ವಿ. ಸೀ ಯವರದು ಬಹುಮುಖೀ ಆಸಕ್ತಿಗಳುಳ್ಳ ವ್ಯಕ್ತಿತ್ವ. ಅವರ ಸಾಹಿತ್ಯದ ಬಹಳ ಮುಖ್ಯವಾದ ಧೋರಣೆ ಸಾಮಾಜಿಕ ಸಮನ್ವಯ ಕುರಿತಾದದ್ದು. ಶ್ರೀಯುತರು ಬರವಣಿಗೆಯನ್ನು ಮಾಡಿದ ಅವಧಿ ಹೊಸಗನ್ನಡ ಸಾಹಿತ್ಯದ ಮೊದಲ ಹಂತ. ಪ್ರಾಚೀನ ಸಾಹಿತ್ಯದ ಅಧ್ಯಯನ, ವ್ಯಾಖ್ಯಾನ ಮತ್ತು ಮರುಮೌಲ್ಯ ಮಾಪನವನ್ನು, ಹೊಸ ಮಾರ್ಗದ ಸಾಧ್ಯತೆಗಳನ್ನು ಎಂ. ವಿ. ಸೀ ಯವರು ತಮ್ಮ ಕೃತಿಗಳಲ್ಲಿ ರೂಪಿಸಿದರು. ಪ್ರಸ್ತುತ ಗ್ರಂಥಗಳು ಎಂ. ವಿ. ಸೀ ಯವರ ಸಾಹಿತ್ಯವನ್ನು ಕಥೆಗಳು, ಕಾವ್ಯ, ಕಾದಂಬರಿಗಳು, ನಾಟಕ, ಮಕ್ಕಳ ಸಾಹಿತ್ಯ, ಪ್ರಬಂಧಗಳು ಎಂದು ಆರು ಶೀರ್ಷಿಕೆಗಳಡಿಯಲ್ಲಿ ವಿಮರ್ಶಿಸಲಾಗಿದೆ. ಈ ಕೃತಿ ಎಂ. ವಿ. ಸಿ ಅವರ ಸಾಹಿತ್ಯ ಶೈಲಿಯನ್ನು, ತೌಲನಿಕ ಅಧ್ಯಯನದ ಹೊಳಹನ್ನು ಅರಿಯಲು ಅನುಕೂಲವಾಗುತ್ತದೆ.

**ಸೀತಾರಾಮಯ್ಯ (ಎಂ. ವಿ)**

ಕದಂಬ : ಸಮಗ್ರ ಸಂಶೋಧನಾ ಲೇಖನಗಳ ಸಂಪುಟ.

(ಎಂ. ವಿ. ಸೀ. ಸಮಗ್ರ ಸಾಹಿತ್ಯ ಮಾಲೆ –1)

(ಬಿ. ಎಂ. ಶ್ರೀ ಪ್ರತಿಷ್ಠಾನದ 50 ನೇ ಪ್ರಕಟಣೆ)

ಪು : xvi–388 ಬೆಲೆ ರೂ 100–00 / ರೂ. 80/–

'ರಾಘವ' ಎಂಬ ಕಾವ್ಯನಾಮದಿಂದಪ್ರಸಿದ್ಧರಾದಪ್ರೊ. ಎಂ. ವಿ. ಸೀತಾರಾಮಯ್ಯನವರ ಸಮಗ್ರ ಸಂಶೋಧನಾ ಲೇಖನಗಳ 'ಸಂಪು. ಇದು ಎಂ. ವಿ. ಸಿ. ಅವರು 80ನೇ ವರ್ಷ ಪೂರೈಸುವ ನೆನಪಿಗಾಗಿ 'ಅಭಿನಂದನಾ' ಸಂಪುಟವಾಗಿ ಪ್ರಕಟವಾಗಬೇಕಿದ್ದು ವಿಧಿವಶಾತ್ ಅವರ ಅಕಾಲಿಕ ನಿಧನದಿಂದಾಗಿ 'ಸಂಸ್ಮರಣ' ಗ್ರಂಥವಾಗಿ ಪ್ರಕಟವಾಗಿದೆ. ಆರಂಭದಲ್ಲಿ ಎಂ. ವಿ. ಸೀ ಅವರ ಎಂಬತ್ತು ಲೇಖನ ದಶ ಸಮಗ್ರ ಸಂಪುಟ ಹೊರತರುವ ಯೋಜನೆ ಇತ್ತಾದರೂಪ್ರಸಕ್ತ'ಕದಂಬ' ಕೃತಿಯಲ್ಲಿ ಸಂಶೋಧನಾ ಲೇಖನಗಳನ್ನು ಮಾತ್ರ ಸೇರಿಸಲಾಗಿದೆ.

ಈ ಕೃತಿಯಲ್ಲಿ 32 ಸಂಶೋಧನಾ ಲೇಖನಗಳಿದ್ದು ಕಾವ್ಯ ಮೀಮಾಂಸೆ ವ್ಯಾಕರಣ, ಛಂದಸ್ಸು, ಕವಿ ಕಾಲ ವಿಚಾರ ಹಾಗೂ ಸಂಶೋಧನೆ ಸಂಕೀರ್ಣ ಎಂಬ ಐದು ಶೀರ್ಷಿಕೆಗಳಡಿಯಲ್ಲಿ ಈ ಲೇಖನಗಳನ್ನು ಅಳವಡಿಸಲಾಗಿದೆ. 'ಕದಂಬ'ಶೀರ್ಷಿಕೆ ಎಂ. ವಿ. ಸೀ. ಅವರೇಸೂಚಿಸಿದ್ದಹೆಸರು. ಕನ್ನಡದಮೊಟ್ಟಮೊದಲ ರಾಜವಂಶದ ಹೆಸರಿನಿಂದ ಹಿಡಿದು ಇದಕ್ಕೆ ಅನೇಕ ಅರ್ಥಗಳೀವೆ. ಸೀತಾರಾಮಯ್ಯನವರ ಬಹುಶ್ರುತ ಪಾಂಡಿತ್ಯ ಈ ಲೇಖನಗಳಲ್ಲಿ ಸ್ಫುಟವಾಗಿ ಕಂಡು ಬರುತ್ತದೆ.

## ಸೂವೆಂ ಅರಗ ವಿಮರ್ಶಾ ಪ್ರಶಸ್ತಿಗಾಗಿ ಕೃತಿಗಳ ಆಹ್ವಾನ

ಬಿ ಎಂ ಶ್ರೀ ಪ್ರತಿಷ್ಠಾನವು ವಾರ್ಷಿಕವಾಗಿ ನೀಡುವ ಸೂವೆಂ ಅರಗ ವಿಮರ್ಶಾ ಪ್ರಶಸ್ತಿ ಗಾಗಿ ಕೃತಿಗಳನ್ನು ಆಹ್ವಾನಿಸುತ್ತಿದೆ. ಹತ್ತು ಸಾವಿರ ನಗದು ಹಾಗೂ ಸ್ಮರಣಿಕೆಗಳನ್ನು ಒಳಗೊಂಡಿರುವ ಈ ಪ್ರಶಸ್ತಿಯನ್ನು 2014 ನೆಯ ಸಾಲಿನ ಮೊದಲ ಆವೃತ್ತಿಯಾಗಿ ಪ್ರಕಟವಾಗಿರುವ ಕನ್ನಡದ ಶ್ರೇಷ್ಠ ವಿಮರ್ಶಾ ಕೃತಿಯೊಂದಕ್ಕೆ ನೀಡಲಾಗುವುದು. ಲೇಖಕರು, ಪ್ರಕಾಶಕರು ಹಾಗೂ ಇತರರು 2014ನೇ ಸಾಲಿನ ಜನವರಿ–ಡಿಸೆಂಬರ್ ಅವಧಿಯಲ್ಲಿ ಮೊದಲ ಆವೃತ್ತಿಯಾಗಿ ಪ್ರಕಟವಾಗಿರುವ ಕನ್ನಡದ ವಿಮರ್ಶಾ ಕೃತಿಯ ಒಂದು ಪ್ರತಿಯ ಜೊತೆ ಖಾಲಿ ಹಾಳೆಯಲ್ಲಿ ಅರ್ಜಿಯನ್ನು ಬರೆದು ಬಿ ಎಂ ಶ್ರೀ ಸ್ಮಾರಕ ಪ್ರತಿಷ್ಠಾನದ ವಿಳಾಸಕ್ಕೆ ಕಳುಹಿಸಬೇಕು.

**Regd. with RNI, New Delhi. KARKAN 24541 dated 08.12.2014**

# ಬಿ.ಎಂ.ಶ್ರೀ.ಸ್ಮಾರಕ ಪ್ರತಿಷ್ಠಾನ, ಬೆಂಗಳೂರು

## 2013 ಮತ್ತು 2014 ಸಾಲುಗಳಲ್ಲಿ ಪ್ರಕಟವಾದ ಪ್ರತಿಷ್ಠಾನದ ಪ್ರಕಟಣೆಗಳ ಪಟ್ಟಿ

| | ಶೀರ್ಷಿಕೆ | ಲೇಖಕ/ಸಂಪಾದಕ |
|---|---|---|
| 1 | ಶ್ರೀಕೃಷ್ಣದೇವರಾಯನ ದಿನಚರಿ | ಎಂ.ವಿ.ಸೀತಾರಾಮಯ್ಯ, ವಿ.ಎಸ್.ಎಸ್.ಆಚಾರ್ಯ |
| 2 | ಇಂಗ್ಲಿಷ್ ಗೀತಗಳು ಮೂಲ ಆಂಗ್ಲಕವನಗಳೊಂದಿಗೆ | ಮೂಲ; ಬಿ.ಎಂ.ಶ್ರೀ. ಸಂ. : ಎಲ್.ಎಸ್ ಶೇಷಗಿರಿರಾವ್ |
| 3 | ಎಂ.ವಿ.ಸೀತಾರಾಮಯ್ಯ:ಜೀವನ ಮತ್ತು ಸಾಹಿತ್ಯ | ಎಂ.ಎಸ್.ಭಾಸ್ಕರ್ |
| 4 | ಪ್ರೊ.ಡಿ.ಲಿಂಗಯ್ಯ:ಜೀವನ ಮತ್ತು ಸಾಹಿತ್ಯ ಸಾಧನೆ | ವಿವಿಧ ಲೇಖಕರು |
| 5 | ಸಿರಿಕಂಟ | ಎನ್.ಬಸವಾರಾಧ್ಯ, ನಾ.ಗೀತಾಚಾರ್ಯ |
| 6 | ಹಸ್ತಪ್ರತಿ ಅಧ್ಯಯನ ಸಮಾವೇಶ ಸಂ.2 | ಸುಂಕಂ ಗೋವರ್ಧನ |
| 7 | ಪ್ರಾಚೀನ ಕನ್ನಡ ಸಾಹಿತ್ಯ ಮತ್ತು ನಾಡು ನುಡಿ ಚಿಂತನ | ಕಾ.ವೆಂ.ಶ್ರೀನಿವಾಸಮೂರ್ತಿ |
| 8 | ಹಳತು –ಹೊನ್ನು | ಕೆ.ಎಸ್.ಮಧುಸೂದನ |
| 9 | ಪರಿಷ್ಕೃತ ಹೊಸಗನ್ನಡ ವ್ಯಾಕರಣ | ಟ.ವಿ.ವೆಂಕಟಾಚಲಶಾಸ್ತ್ರಿ |
| 10 | ಸಾಹಿತ್ಯೋಪಾಸಕರು | ಪಿ.ವಿ.ನಾರಾಯಣ, ಎಸ್.ವಿ.ಶ್ರೀನಿವಾಸರಾವ್ |
| 11 | ಸಾರ್ಥಕ ಬದುಕಿನ ಶತಾಯುಷಿ ಪ್ರೊ..ಮಳಗಿ | ವಿಜಯಾ ಸುಬ್ಬರಾಜ್ |
| 12 | ಶ್ರೀ ಕೈವಾರ ರಾಜಾರಾವ್ | ಜಗನ್ನಾಥ ಹೇಮಾದ್ರಿ |
| 13 | ಕೆಲವು ಕನ್ನಡ ನಿಘಂಟುಗಳು | ಎಸ್.ಕಾರ್ತಿಕ್ |
| 14 | ವೈಚಾರಿಕ ಜಾಗೃತಿ | ಡಾ. ಜಿ. ರಾಮಕೃಷ್ಣ |

**Printed and published by** : B.R.Ravindranath on behalf of the BMSRI SMARAKA PRATISHTANA, 3rd Main Road, NR Colony, Bangalore - 560019 and printed at Annapoorneshwari Printers, No. 11, 10 'C' Main, 6th Block, Rajajinagar, Bangalore 10. and published at BMSRI SMARAKA PRATISHTANA, 3rd Main Road, NR Colony, Bangalore - 560019 Editor : B.R.Ravindranath



**ಅಚ್ಚಾದ ಪುಸ್ತಕ**

ತೆರೆದ–ಅಂಚೆ

*ಶ್ರೀಮತಿ/ಶ್ರೀ*...............................................................................

...............................................................................................

...............................................................................................

*ವಿಳಾಸ*
**ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ**
ಬಿ.ಎಂ.ಶ್ರೀ. ಕಲಾಭವನ, ೩ನೇ ಮುಖ್ಯರಸ್ತೆ
ನರಸಿಂಹರಾಜ ಕಾಲೋನಿ, ಬೆಂಗಳೂರು – ೧೯
ದೂರವಾಣಿ : ೨೬೬೧೫೮೭೭